# ವೇಣೂರಿನ ಗತ ವೈಭವ

ಲೇಖಕರು: ದಿ| ವೇ| ಲೋಕನಾಥ ಶಾಸ್ತ್ರಿ, ಸರಸ್ವತಿಭೂಷಣ.



ಎತ್ತರ: 36 ಅಡಿ. ಶ್ರೀ ಗೋಮಟೇಶ್ವರ, ವೇಣೂರು. Photo: K. V. Shenoy.

1955

ಬೆಲೆ ಆಣೆ ೧.

ಒಂದಾಣೆ ಮಾಲೆ —•— ಮಂಗಳೂರು.



ಶಾಂತಿನಾಥಾಯ ನಮಃ

# ವೇಣೂರಿನ ಗತವೈಭವ

**ಆಭಾರ**

ದಿ। ಪಂಡಿತ ವಿ. ಲೋಕನಾಥ ಶಾಸ್ತ್ರಿಗಳವರಿಂದ ಬರೆಯಲ್ಪಟ್ಟು, ಶ್ರೀ। ಗುಂಡೂರು ಧರಣಪ್ಪ ಅಧಿಕಾರಿಗಳು ತಮ್ಮ ಮಾತೋಶ್ರೀ ಶ್ರೀಮತಿ ದೇಜಮ್ಮನವರ ಸ್ಮಾರಕವಾಗಿ ಪ್ರಕಟಿಸಿ ಶಾಸ್ತ್ರದಾನ ಮಾಡಿರುವ ಮೂಡಬಿದರೆಯ ಶ್ರೀ ವೀರವಾಣೀ ವಿಲಾಸ ಗ್ರಂಥ ಮಾಲೆಯ ೧೪ನೆಯ ಪುಷ್ಪವಾದ "ವೇಣೂರಿನ ಗತ ವೈಭವ" ಎಂಬ ಮೂಲಗ್ರಂಥದಿಂದ ಒಂದಂಶವನ್ನು ಆಯ್ದು ಈ ಪುಸ್ತಕವನ್ನು ಪ್ರಕಟಿಸಿರುವೆವು. ಈ ಬಗ್ಗೆ ಅವರೆಲ್ಲರಿಗೂ ನಾವು ಆಭಾರಿಗಳಾಗಿರುವೆವು.

**ಸಂಚಾಲಕರು: ಒಂದಾಣೆ ಮಾಲೆ.**

ಸಂಖ್ಯೆಯು ೩೦೦. ಇದರ ಸರಹದ್ದಿನಲ್ಲಿ ಸುಮಾರು ೨೦೦೦ ಜನರು ವಾಸವಾಗಿರುವರು. ಇಲ್ಲಿ ಪ್ರಕೃತ ಮನೆ, ಅಂಗಡಿ, ಗುಡಿಸಲು ಮೊದಲಾದುವುಗಳು ೩೦೦ ಮಿಕ್ಕಿವೆ. ಓದುಬರಹ ಬಲ್ಲವರು ಸೇಕಡಾ ೫೦. ಇಲ್ಲಿ ಸಾಮಾನ್ಯವಾಗಿ ಕೆಲವು ವ್ಯಾಪಾರಸ್ಥರಿರುವರು. ಇಲ್ಲಿಯ ಹವಾಗುಣವು ಸಮಶೀತೋಷ್ಣವಾದರೂ ಒಮ್ಮೊಮ್ಮೆ ಮಲೇರಿಯಾ ಜ್ವರವು ತಲೆದೋರುವುದು. ಈ ಊರಿನ ಕ್ಷೇತ್ರಫಲವು ೪ ಚಚ್ಚೌಕ ಮೈಲುಗಳು. ಭತ್ತ, ತೆಂಗು, ಅಡಿಕೆ, ಗೇರುಬೀಜ ಈ ಊರಿನ ಮುಖ್ಯ ಉತ್ಪತ್ತಿ; ಈ ಊರಿಗೆ ಬೇಕಾಗುವ ದವಸಧಾನ್ಯ ಮತ್ತು ಇತರ ಸಾಮಾನುಗಳು ಬಂಟ್ವಾಳ, ಮೂಡಬಿದಿರೆ ಮೊದಲಾದ ಸ್ಥಾನಗಳಿಂದ ಬರುತ್ತಿರುವವು. ಇಲ್ಲಿಗೆ



ಶಾಂತಿನಾಥಾಯ ನಮಃ

# ವೇಣೂರಿನ ಗತವೈಭವ

ವೇಣೂರು ಮಂಗಳೂರಿನಿಂದ ಈಶಾನ್ಯಕ್ಕೆ ೩೪ ಮೈಲು ದೂರದಲ್ಲಿದೆ. ಇದಕ್ಕೆ ಪೂರ್ವ ಗುರುವಾಯನಕೆರೆ ಯಾ ಬೆಳ್ತಂಗಡಿಗೆ ಹೋಗುವ ರಸ್ತೆ, ಪಶ್ಚಿಮ ಮೂಡಬಿದಿರೆಗೆ ಹೋಗುವ ರಸ್ತೆ. ಇಲ್ಲಿಂದ ಬೆಳ್ತಂಗಡಿ ಮತ್ತು ಮೂಡಬಿದಿರೆಗೆ ೧೨, ೧೨ ಮೈಲುಗಳಿವೆ. ಈ ವೇಣೂರು ಮೇಲ್ಕಂಡ ಊರುಗಳಿಗೆ ಹೋಗುವ ರಸ್ತೆಗಳ ಮಧ್ಯಸ್ಥಳವಾಗಿ ಫಲ್ಗುನಿಯೆಂಬ ನದಿಯ ದಂಡೆಯಲ್ಲಿದೆ.

ಭೂವಿವರಣೆ: — ಇಲ್ಲಿಯ ಪ್ರಕೃತಿಸೌಂದರ್ಯವು ಬಹಳ ಮನೋಹರವಾಗಿದ್ದು ನೋಟಕ್ಕೆ ಬಲು ಅಂದವಾಗಿರುತ್ತದೆ. ಇಲ್ಲಿ ಪ್ರಕೃತ ಜನಸಂಖ್ಯೆಯು ೩೦೦. ಇದರ ಸರಹದ್ದಿನಲ್ಲಿ ಸುಮಾರು ೨೦೦೦ ಜನರು ವಾಸವಾಗಿರುವರು. ಇಲ್ಲಿ ಪ್ರಕೃತ ಮನೆ, ಅಂಗಡಿ, ಗುಡಿಸಲು ಮೊದಲಾದುವುಗಳು ೩೦೦ ಮಿಕ್ಕಿವೆ. ಓದುಬರಹ ಬಲ್ಲವರು ಸೇಕಡಾ ೫೦. ಇಲ್ಲಿ ಸಾಮಾನ್ಯವಾಗಿ ಕೆಲವು ವ್ಯಾಪಾರಸ್ಥರಿರುವರು. ಇಲ್ಲಿಯ ಹವಾಗುಣವು ಸಮಶೀತೋಷ್ಣವಾದರೂ ಒಮ್ಮೊಮ್ಮೆ ಮಲೇರಿಯಾ ಜ್ವರವು ತಲೆದೋರುವುದು. ಈ ಊರಿನ ಕ್ಷೇತ್ರಫಲವು ೪ ಚಚ್ಚೌಕ ಮೈಲುಗಳು. ಭತ್ತ, ತೆಂಗು, ಅಡಿಕೆ, ಗೇರುಬೀಜ ಈ ಊರಿನ ಮುಖ್ಯ ಉತ್ಪತ್ತಿ; ಈ ಊರಿಗೆ ಬೇಕಾಗುವ ದವಸಧಾನ್ಯ ಮತ್ತು ಇತರ ಸಾಮಾನುಗಳು ಬಂಟ್ವಾಳ, ಮೂಡಬಿದಿರೆ ಮೊದಲಾದ ಸ್ಥಾನಗಳಿಂದ ಬರುತ್ತಿರುವವು. ಇಲ್ಲಿಗೆ

ಚಾರ್ಮಾಡಿ, ಶಿವಮೊಗ್ಗಾ ಮೊದಲಾದ ಕಡೆಗಳಿಂದ ಮೋಟರ್ ಸರ್ವಿಸ್ ಇದೆ.

ಸ್ಥಳ ಪುರಾಣ:—ನಮ್ಮ ತುಳುನಾಡಿನಲ್ಲಿ ವೇಣೂರು ಈಗ ಬಲು ಚಿಕ್ಕ ಹಳ್ಳಿಯಂತಿದ್ದರೂ ಸುಮಾರು ೩೮೭ ವರ್ಷಗಳ ಹಿಂದೆ ಅಜಿಲ ವಂಶೀಯರ ರಾಜ್ಯಶಾಸನ ಕಾಲದಲ್ಲಿ ಇದೊಂದು ದೊಡ್ಡ ಪಟ್ಟಣವಾಗಿ ರಾಜಧಾನಿಯಾಗಿದ್ದಿತು. ಆಗ ಇಲ್ಲಿ ಜೈನರ ೭೭೦ ಮನೆಗಳಿದ್ದುವೆಂದು 'ಜೈನಾಚಾರ'ವೆಂಬ ಗ್ರಂಥದಲ್ಲಿ ಹೇಳಿರುತ್ತದೆ. ಈಗ ವಾಡಿಕೆಯಲ್ಲಿ ಇರುವ 'ವೇಣೂರು' ಮೊದಲು 'ಏನೂರು' ಅಥವಾ 'ಏಣೂರು' ಎಂಬ ದಾಗಿ ಕರೆಯಲ್ಪಡುತ್ತಿತ್ತೆಂದು ಶಿಲಾಶಾಸನವಾಚಕಗಳಿಂದ ಗೊತ್ತಾಗುವುದು.

ಈಗ ಮಾತ್ರ ಆ ಅಜಿಲರಸರ ಅರಮನೆಯ ಕಟ್ಟಡದ ಬೇರಾವ ಬಗೆಯ ಭಗ್ನಾವಶೇಷವೂ ಉಳಿದಿಲ್ಲವಾದರೂ ಮುಂಚೆ ಅರಮನೆಯ ತಳಹದಿಯ ನೆಲಕ್ಕೆ ಹಾಸಿದ ಕೆಲವು ದೊಡ್ಡ ದೊಡ್ಡ ಕಲ್ಲುಗಳು ಅಲ್ಲಲ್ಲಿ ಚದರಿಕೊಂಡಿವೆ. ಆ ಅರಮನೆಯ ಬಡಗಣ ಹೆಬ್ಬಾಗಿಲ ಉಭಯ ಪಾರ್ಶ್ವಗಳಲ್ಲಿ ನಿಲ್ಲಿಸಿದ ಕಲ್ಲಾನೆಗಳು ಗತವೈಭವವನ್ನು ಈಗಲೂ ಸೂಚಿಸುತ್ತಿವೆ.

ಈಗ ವೇಣೂರು ಜೈನಪೇಟೆಯಲ್ಲಿರುವ ಬಸದಿಗಳೂ ಮಹಾಲಿಂಗೇಶ್ವರ ದೇವಾಲಯವೂ ಜೈನಶ್ರಾವಕರ ಮತ್ತು ವೈದಿಕರ ೧೫ ಮನೆಗಳೂ ಇವೆ. ಇಲ್ಲಿ ಪ್ರಾಚೀನ ಐತಿಹಾಸಿಕ ವಿಷಯಗಳೆಂದರೆ, ಅಜಿಲರಸರ ರಾಜಧಾನಿಯ ಗತವೈಭವ ಮತ್ತವರ ಶಾಸನಕಾಲದಲ್ಲಿ ಜರಗಿದ ದೇವಾಲಯನಿರ್ಮಾಣಾದಿ ಧರ್ಮಕಾರ್ಯಗಳು. ಇವೆರಡು ಅತಿ ಪ್ರಾಮುಖ್ಯವಾದುವುಗಳಾಗಿವೆ.

ಮೊದಲನೆಯ ತಿಮ್ಮಣ್ಣಾಜಿಲರ ಕಾಲಕ್ಕಿಂತಲೂ ಮುಂಚಿನ ಇತಿಹಾಸವು ಗೊತ್ತಿಲ್ಲವಾದರೂ, ಕ್ರಿ. ಶ. 1154ರಿಂದ 1786ರ ಅಂದರೆ ಸುಮಾರು 632 ವರ್ಷಗಳ ವರೆಗೆ ಅಜಿಲರಸರು ರಾಜ್ಯವಾಳಿದರು. ಅವರಲ್ಲಿ ಕ್ರಿ. ಶ. 1550ರಿಂದ 1610ರ ವರೆಗೆ ಆಳಿದ ೪ನೆಯ ವೀರ ತಿಮ್ಮಂಣಾಜಿಲರ ಶಾಸನಕಾಲದಲ್ಲಿ ವೇಣೂರು ಬಹಳ ಪ್ರಸಿದ್ಧಿಯನ್ನೂ ಉನ್ನತಿಯನ್ನೂ ಹೊಂದಿದ್ದಿತು. ಆ ಪುಣ್ಯಪುರುಷರೇ ಶ್ರೀ ಗೋಮಟೇ

ಶ್ವರ ಮಹಾಮೂರ್ತಿಯ ಸ್ಥಾಪನೆಯನ್ನು ಕ್ರಿ. ಶ. 1604ರಲ್ಲಿ ಮಾಡಿಸಿದರು. ಅವರ ಹಿರಿಯ ಹೆಂಡಂದಿರಾದ ಪಾಂಡ್ಯಕ್ಕ ಮತ್ತು ಮಲ್ಲಿದೇವಿಯೆಂಬೀರ್ವರು ಅಕ್ಕಂಗಳ ಬಸದಿಯನ್ನೂ ಕಿರಿಯ ಹೆಂಡತಿಯಾದ 'ಬಿನ್ನಾಣಿ' ಎಂಬವಳು ಬಿನ್ನಾಣಿಬಸದಿಯನ್ನೂ ಅದೇ ವರ್ಷದಲ್ಲಿ ನಿರ್ಮಾಪಿಸಿ ಉಂಬಳಿಯನ್ನು ಬಿಟ್ಟಿರುತ್ತಾರೆ. ಆದರೆ ಅಲ್ಲಿಯ ಬಸದಿಗಳಲ್ಲಿ ಶ್ರೀ ಶಾಂತೀಶ್ವರಸ್ವಾಮಿಯ ಕಲ್ಲಬಸದಿಯೇ ಕೊಂಚ ಪ್ರಾಚೀನವಾದುದು. ಅದರ ನಿರ್ಮಾಣವಾಗಿ ಸುಮಾರು ೪೬೧ ವರ್ಷಗಳಾದವು. ಆ ಎಲ್ಲಾ ಬಸದಿಗಳ ಪರಿಚಯವೂ ಅಜಿಲರಸರ ಸಂಕ್ಷಿಪ್ತಕಾರ್ಯ ಪರಿಚಯವೂ ಅಲ್ಲಿಯ ಶಿಲಾಶಾಸನಗಳೂ ಯಥಾಕ್ರಮವಾಗಿ ಬರೆಯಲ್ಪಡುವುವು.

ಈಗ ವೇಣೂರು ಎಂಬ ಹೆಸರು ಹೇಗೆ ಬಂತೆಂಬುದು ವಿಚಾರಣೀಯವಾದ ಅಂಶ. ಈ ವಿಷಯವಾಗಿ ಶ್ರೀಯುತ ಮಂಜೇಶ್ವರ ಗೋವಿಂದ ಪೈಗಳವರ ಅಭಿಪ್ರಾಯದ ಸಾರಾಂಶವು ಈ ರೀತಿಯಾಗಿದೆ—

"ಈಗ ವೇಣೂರು ಎಂದು ಕರೆಯಲ್ಪಡುವ ಈ ಊರಿಗೆ ಮುಂಚಿನ ಹೆಸರು 'ಏನೂರು' ಎಂದಾಗಿತ್ತೆಂದೂ, ಇದೇ ಹೆಸರು ಕ್ರಿ. ಶ. 1621ನೆಯದೊಂದು ಶಾಸನದಲ್ಲಿ 'ಯೇನೂರು' ಎಂಬ ರೂಪದಿಂದಿದೆಯೆಂದೂ, ಕನ್ನಡ ಭಾಷೆಯ ಶಬ್ದಗಳನ್ನು ನಾಡಗರು ಉಚ್ಚರಿಸುವಲ್ಲಿ 'ಎ' ಮತ್ತು 'ವೆ' ಎಂಬವು ಪರಸ್ಪರ ಪರಿವರ್ತನವನ್ನು ಹೊಂದುತ್ತವೆಂಬುದಕ್ಕೆ ಎಷ್ಟೋ ದೃಷ್ಟಾಂತಗಳಿವೆಯೆಂದೂ, ಉದಾಹರಣಾರ್ಥವಾಗಿ:—ಎಗ್ಗಳ–ವೆಗ್ಗಳ, ಎಂಗಿ–ವೆಂಗಿ ಎಂಕಟ–ವೆಂಕಟವೆಂದೂ, ಹಾಗೆಯೇ ಏನು–ಯೇನು, ಏಕೆ–ಯೇಕೆಯೆಂದೂ, ಪರಸ್ಪರ ಪರಿವರ್ತಿಸುವುದುಂಟೆಂದೂ, ಆದುದರಿಂದ ವೇಣೂರಿನ ಪೂರ್ವನಾಮಧೇಯವು 'ಏನೂರು' ಅಥವಾ 'ಏಣೂರು' ಎಂದಿದ್ದು ಅದು ಲೋಕದ ಉಚ್ಚಾರದಲ್ಲಿ 'ಯೇನೂರು' ಅಥವಾ 'ಯೇಣೂರು' ಎಂದಾಯಿತೆಂದೂ, ಆ ಬಳಿಕ ಅದರಿಂದ 'ವೇಣೂರು' ಎಂದಾಗಿರಬೇಕೆಂದೂ ಊಹಿಸಿರುವರು. 'ಏಣೂರು' ಶಬ್ದದ ನಿಷ್ಪತ್ತಿಯ ವಿಚಾರದಲ್ಲಿ ಕಾರ್ಕಳ ಸೀಮೆಯ ಹೋಬಳಿಗಳಲ್ಲಿ ಸಂಖ್ಯಾವಾಚಿಯು ಪೂರ್ವಪದವಾಗಿರುವ ಎರಡೂರು, ನಾಲ್ಕೂರು, ಐದೂರು, ಇರ್ವತ್ತೂರು, ಎಂಬಂತೆ 'ಎಣ್+ಊರು=ಎಣ್ಣೂರು (ಎಣ್=ಎಂಟು) ಎಂಬುದೊಂದು

ಮೂಲಶಬ್ದದಿಂದ 'ಣ್ಣ' ಎಂಬ ದಡ್ಡಕ್ಷರದಲ್ಲಿ ಒತ್ತು ಉಚ್ಚಾರದಿಂದ ಕ್ರಮಶಃ ಲೋಪವಾಗಿ ಅದಕ್ಕೆ ಬದಲಾಗಿ ಮೊದಲನೆಯ ಅಕ್ಷರವಾದ 'ಎ' ಎಂಬುದು ದೀರ್ಘವಾಗಿ 'ಏಣೂರು' ಎಂದಾಗಿರಬಹುದೆಂದೂ, 'ಣ' ಕಾರವು 'ನ' ಕಾರಾದೇಶವನ್ನು ಹೊಂದಿ ಪರಸ್ಪರ ವಿನಿಮಯವಾಗಿರ ಬೇಕೆಂದೂ ಅಭಿಪ್ರಾಯಪಡುತ್ತಾರೆ."

ಆದಕಾರಣ ಪೂರ್ವದ 'ಏಣೂರು' ಎಂಬುದು ಈಗ 'ವೇಣೂರು' ಯೆಂಬದಾಗಿ ಕರೆಯಲ್ಪಡುವುದಾದರೂ, ಆ ಎಂಟು ಊರುಗಳಾವುವು? ಈ ಶಬ್ದವು ಯಾವ ಅರ್ಥದಲ್ಲಿ ಪ್ರವರ್ತಿಸಲ್ಪಟ್ಟದೆಯೆಂದು ಪ್ರಶ್ನೆಯುಂಟಾಗುವುದು. ಆದರೆ, ಇದು ಸಂದಿಗ್ಧವೂ ವಿಚಾರಣೀಯವೂ ಆದ ವಿಷಯವಾಗಿದೆ.

## ೨. ವೇಣೂರಿನ ಜೈನಬಸದಿಗಳು

ಇಲ್ಲಿ ೮ ಜೈನಬಸದಿಗಳಿರುವುವೆಂದು ಹಿಂದೆಯೇ ಹೇಳಿರುವೆವಷ್ಟೇ? ಅವುಗಳಲ್ಲಿ ಒಂದೆರಡು ಬಸದಿಗಳನ್ನುಳಿದು ಮಿಕ್ಕವು ಶಿಲಾಮಯಗಳಾಗಿಯೂ ಸುಮಾರು 450 ವರ್ಷಗಳಿಂದ ಅರ್ವಾಚೀನಗಳಾಗಿಯೂ ಇವೆ ಯೆಂಬುದು ಶಿಲಾಲೇಖಗಳಿಂದ ತಿಳಿದುಬರುವುದು. ಇಲ್ಲಿ ಇತಿಹಾಸಾರ್ಹವಾದ ಬಸದಿಗಳಲ್ಲಿ ಶ್ರೀ ಗೋಮಟೇಶ್ವರನ ಮಹಾಮೂರ್ತಿಯೂ ಶ್ರೀ ಶಾಂತೀಶ್ವರ ಸ್ವಾಮಿಯ ಕಲ್ಲುಬಸದಿಯೂ ಬಹಳ ಪ್ರಾಮುಖ್ಯನಾದುವು.

### (೧) ಶ್ರೀ ಗೋಮಟೇಶ್ವರನ ಮಹಾಮೂರ್ತಿ

ಇದು ಉತ್ತರಾಭಿಮುಖವೂ ಕಾಯೋತ್ಸರ್ಗವೂ ಸುಮಾರು ೩೫ ಅಡಿ ಉನ್ನತವೂ ಆದ ಕಗ್ಗಲ್ಲಿನಿಂದ ನಿರ್ಮಿಸಲ್ಪಟ್ಟುದೂ ಆಗಿದೆ. ದಕ್ಷಿಣ ಭಾರತದಲ್ಲಿರುವ ಶ್ರೀ ಗೋಮಟೇಶ್ವರ ಮೂರು ಮಹಾಮೂರ್ತಿಗಳಲ್ಲಿ ಇದು ಉನ್ನತಿಯಲ್ಲಿ ಕಿರಿಯದು, ಕಾಲಮಾನದಿಂದ ಕೊನೆಯದು. ಇದು ಶ್ರವಣಬೆಳಗೊಳದ ಮತ್ತು ಕಾರ್ಕಳದ ಪ್ರತಿಮೆಯಂತೆ ಬೆಟ್ಟಗಳ ಮೇಲಿರದೆ, ಸಮತಟ್ಟವಾದೊಂದು ದಿನ್ನೆಯಲ್ಲಿದೆ. ಈ ಮಹಾಮೂರ್ತಿಯನ್ನು ಬಳಸಿಕೊಂಡು ಸುಂದರವಾದೊಂದು ಪ್ರಾಕಾರವಿದೆ. ಇದನ್ನು

(೧) ಶ್ರವಣಬೆಳುಗೊಳದಲ್ಲಿಯದು 57 ಅಡಿ ಎತ್ತರ, ಕ್ರಿ. ಶ. 981ರಲ್ಲಿ ಪ್ರತಿಷ್ಠೆ. ಕಾರ್ಕಳದಲ್ಲಿಯದು 41½ ಅಡಿ ಎತ್ತರ, ಕ್ರಿ. ಶ. 1432ರಲ್ಲಿ ಪ್ರತಿಷ್ಠೆ. ವೇಣೂರಲ್ಲಿಯದು 35 ಅಡಿ ಎತ್ತರ, ಕ್ರಿ. ಶ. 1604ರಲ್ಲಿ ಪ್ರತಿಷ್ಠೆ.

ಒಳಹೊಗುತ್ತಲೇ ಧ್ವಜಸ್ತಂಭವೂ ಬಳಿಕ ಕಗ್ಗಲ್ಲನ್ನು ಹಾಸಿ ಕಟ್ಟಿರುವ ದೊಡ್ಡದೊಂದು ಮುಖಮಂಟಪವೂ ಇದೆ. ಇದನ್ನೇರುವ ಸೋಪಾನ ಪಂಕ್ತಿಯ ಉಭಯ ಪಾರ್ಶ್ವಗಳಲ್ಲಿ ಕಗ್ಗಲ್ಲಿಂದ ಮಾಡಲ್ಪಟ್ಟಿರುವ ಎರಡು ಸುಂದರವಾದ ಆನೆಗಳಿವೆ. ಈ ಮಂಟಪದ ಮುಂಭಾಗದಲ್ಲಿ ಮಾತ್ರ ಪ್ರವೇಶದಾರಿಯನ್ನು ಬಿಟ್ಟು ಕಲ್ಲಬೇಲಿಯಿದೆ. ಈ ಮಂಟಪದ ಇನ್ನೆರಡು ಕಟ್ಟೆಗಳಿವೆ. ಬಳಿಕ ಮೇಲಿನ ಕಲ್ಲಕಟ್ಟೆಯ ಪದ್ಮಪೀಠದ ಮೇಲೆ ಶ್ರೀ ಗೋಮಟೇಶ್ವರ ಮಹಾಮೂರ್ತಿಯು ವಿರಾಜಿಸಲ್ಪಟ್ಟಿದೆ. ಇದರ ಹಿಂದೆ ಕಲ್ಲಚಪ್ಪರವನ್ನು ಅಥವಾ ಅಟ್ಟವಣಿಗೆಯನ್ನು ಕಟ್ಟಿಸಬೇಕೆಂಬ ಅಭಿಪ್ರಾಯದಿಂದ ಕಲ್ಲಿನ ಕಂಭಗಳನ್ನು ನಟ್ಟಿರುವುದಾಗಿದೆ.

ಈ ಮೂರ್ತಿಯ ಹಿಂದೆ ಇದರ ಪಾದತಳದಿಂದ ಮೊಳಕಾಲಿನ ವರೆಗೆ ಅಗಲವಾದೊಂದು ಶಿಲಾಫಲಕವಿದೆ. ಇದು ಅದರಾಧಾರಕ್ಕಾಗಿರಬಹುದೆಂದು ತೋರುತ್ತದೆ. ಈ ಫಲಕದ ಆಚೀಚೆಯ ಬದಿಗಳಲ್ಲಿ (೨) ಕುಕ್ಕುಟಸರ್ಪಗಳ ಚಿಹ್ನೆಯಾಗಿ ಮೂರ್ತಿಯ ಇಕ್ಕಡೆಗಳಲ್ಲಿಯೂ ಮೂರು ಮೂರು ಹೆಡೆಯ ೨ ಸರ್ಪಗಳು ಡೊಂಕುಡೊಂಕಾಗಿ ಮೇಲಕ್ಕೆ ಹರಿದಿವೆ. ಇನ್ನೂ ಚಿಕ್ಕಪುಟ್ಟ ಕೆಲವು ಸರ್ಪಗಳಿವೆ.

ಈ ಗೋಮಟೇಶ್ವರಸ್ವಾಮಿಯ ಪಾದಗಳ ನಡುವಿನಿಂದ ೨ ಬಳ್ಳಿಗಳಿದ್ದು ಆಯಾ ಬಳ್ಳಿಗಳು ಆಯಾ ತೊಡೆಯನ್ನು ವೇಷ್ಟಿಸಿ ಅಲ್ಲಿಂದ ಮೇಲಕ್ಕೆ ಬೆಳೆದು, ಆಯಾ ಕೈಯ್ಯ ಮಣಿಗಂಟಿನ ಮೇಲ್ಭಾಗಕ್ಕೆ ಹರಿದು, ಬಳಿಕ ಕೈಯನ್ನು ೨ ಸಲ ಸುತ್ತಿ ಆಯಾ ತೋಳಲ್ಲಿ ಮುಗಿವಂತೆ ಕೆತ್ತಿದೆ. ಈ ಮೂರ್ತಿಯ ಕುರುಳುಗಳು ಇತರ ಜೈನ ಮೂರ್ತಿಗಳಂತೆಯೇ ಗುಂಗುರು ಗುಂಗುರುಗಳಾಗಿವೆ. ಕಿವಿಗಳು ಜೋಲುಬಿದ್ದು ಅವುಗಳಲ್ಲಿಯ ದೊಡ್ಡ ತೂತುಗಳು ಭಾರದಿಂದ ಮಡಚಿ ನೇಲುವಂತಿವೆ. ಇದರ ಮುಖಮುದ್ರೆಯಿಂದ ನಗುಮಿನುಗುವಂತಿದೆ. ಮೂರು ಮೂರ್ತಿ

---

(೨) ಶ್ರೀ ವೃಷಭತೀರ್ಥಂಕರರ ಪುತ್ರರಾದ ಬಾಹುಬಲಿ ಸ್ವಾಮಿಯು ಒಂದು ವರ್ಷದ ವರೆಗೆ ಪ್ರತಿಮಾಯೋಗದಿಂದಿರಲು ಅವರ ಸುತ್ತ ಕಾಡು ಬೆಳೆದು, ಅಲ್ಲಿ ಕುಕ್ಕುಟಸರ್ಪ (ಹಾವಿನ ಹೆಡೆಯುಳ್ಳ) ಕೋಳಿಗಳೆಂಬ ಭಯಂಕರ ಜಂತುಗಳು ತುಂಬಿದ್ದುವೆಂದು ಜೈನಶಾಸ್ತ್ರದಲ್ಲಿ ಹೇಳಿದೆ. ಅಂತಹ ಬಾಹುಬಲಿಯ ಕಾಯೋತ್ಸರ್ಗ ಧ್ಯಾನದ ಮೂರ್ತಿಗಳೆಂದೇ ಗೋಮಟೇಶ್ವರನೆಂದು ಕರೆಯಲ್ಪಡುತ್ತಿವೆ. ಹಾಗಾಗಿ ಈ ಮೂರ್ತಿಯ ಅಕ್ಕಪಕ್ಕಗಳಲ್ಲಿ ಕುಕ್ಕುಟಸರ್ಪಗಳ ಕೆತ್ತನೆಯನ್ನು ಮಾಡುವರು.

ಗಳ ಮಾಳ್ಕೆಯಲ್ಲಿ ವೈಯಕ್ತಿಕ ವ್ಯತ್ಯಾಸಗಳು ಅಲ್ಲಲ್ಲಿ ಇವೆಯಾದರೂ ಇವಲ್ಲಿ ತೋರಿಬರುವ ಶಿಲ್ಪಸಮಯದ ಸಮಾನತೆಯೂ ವಿಸ್ಮಯನೀಯ ವಾದುದು.

ಇದರ ಪ್ರಾಕಾರದ ಹೊರಗಡೆ ಅಂಗಣದಲ್ಲಿ ಬ್ರಹ್ಮದೇವಸ್ತಂಭವಿದೆ. ಇದರ ತುದಿಯಲ್ಲಿ ದಕ್ಷಿಣಾಭಿಮುಖವಾಗಿ ಕುಳಿತಿರುವ ಬ್ರಹ್ಮದೇವನ ಮೂರ್ತಿಯಿದೆ. ಅದರ ಎಡಗೈಯಲ್ಲಿ ತೆಂಗಿನ ಕಾಯಂತಿರುವ ಹಣ್ಣೊಂದಿದೆ. ಬಲಗೈಯಲ್ಲಿ ಅದನ್ನು ಹೋಳಿಸಲಿಕ್ಕೋ ಎಂಬಂತೆ ಹೆಗಲಿಗೆ ಆನಿಸಿರುವ ಕತ್ತಿಯೊಂದಿದೆ. ಈ ಕಂಭದಲ್ಲಿ ಕೆತ್ತನೆಯ ಕೆಲಸವು ಏನೂ ಮಾಡಿಲ್ಲ. ಅದರಲ್ಲಿ ಶಿಲಾಲೇಖವೂ ಇಲ್ಲ.

ಇಲ್ಲಿಯ ಗೋಮಟೇಶ್ವರನ ಪ್ರತಿಷ್ಠೆಯಾಗಿ ಇಂದಿಗೆ 346 ವರ್ಷಗಳಾದುವೆಂದು ಶಿಲಾಲೇಖದಿಂದ ತಿಳಿಯಬಹುದು. ಈ ಮಹಾಮೂರ್ತಿಯ ದರ್ಶನಕ್ಕಾಗಿ ಪ್ರತಿ ವರ್ಷವೂ ಸಾವಿರಾರು ಮಂದಿ ಯಾತ್ರಿಕರು ಬರುತ್ತಿರುತ್ತಾರೆ. ಇಲ್ಲಿ ವರ್ಷಂಪ್ರತಿ ಫಾಲ್ಗುಣ ಶುದ್ಧ ೧೫ನೆಯ ದಿವಸ ರಥೋತ್ಸವ ಜಾತ್ರೆಯು ಜರಗುವುದು. ಇದರ ಮತ್ತು ದೈನಿಕ ಪೂಜಾ ವಿನಿಯೋಗಾದಿಗಳ ಬಗ್ಗೆ ಸರ್ಕಾರದಿಂದ 90—0—0 ರೂ. ತಸ್ತೀಕು ದೊರೆಯುವುದು.

## (೨) ಅಕ್ಕಂಗಳ ಬಸದಿ

ಈ ಪ್ರಾಕಾರದ ಬಡಗು ಪಾರ್ಶ್ವದಲ್ಲಿರುವ ಬಾಗಿಲನ್ನು ಒಳಹೊಗುತ್ತಲೇ ಆಚೀಚೆಯ ಪಕ್ಕದಲ್ಲಿ ಒಂದೊಂದು ಚಿಕ್ಕದಾದ ಬಸ್ತಿಗಳಿವೆ. ಇವಲ್ಲಿ ಪಡುಗಡೆಯಿರುವ ಬಸ್ತಿಗೆ 'ಅಕ್ಕಂಗಳ ಬಸದಿ'ಯೆಂದೂ ಮೂಡುಗಡೆಯಿರುವ ಬಸ್ತಿಗೆ 'ಬಿನ್ನಾಣಿ ಬಸದಿ'ಯೆಂದೂ ಹೆಸರು. ಇಲ್ಲಿ ೮ನೆಯ ತೀರ್ಥಂಕರರಾದ ಶ್ರೀಚಂದ್ರನಾಥ ಸ್ವಾಮಿಯ ಶಿಲಾವಿಗ್ರಹವಿದೆ. ಈ ಬಸದಿಯನ್ನು ವೀರತಿಮ್ಮರಾಜ ಅಜಿಲರ ಹಿರಿಯರಾಣಿಯರಾದ ಪಾಂಡ್ಯಕ್ಕದೇವಿ ಮತ್ತು ಮಲ್ಲಿದೇವಿ ಎಂಬವರೀರ್ವರು ಕ್ರಿ. ಶ. 1604ರಲ್ಲಿ ನಿರ್ಮಾಪಿಸಿ ಉಂಬಳಿಯನ್ನು ಬಿಟ್ಟಿರುತ್ತಾರೆಂದು ಅದರ ಬಳಿಯಲ್ಲಿರುವ ಶಿಲಾಲೇಖನದಲ್ಲಿದೆ. ಇವರೀರ್ವರೂ ಕಿರಿಯ ಹೆಂಡತಿಯಾದ 'ಬಿನ್ನಾಣಿ'ಯೆಂಬವಳಿಗೆ ಸವತಿಗಳಾದ ಕಾರಣ ಅವರು ಕಟ್ಟಿಸಿದ ಬಸ್ತಿಗೆ ಅಕ್ಕಂಗಳ ಬಸದಿಯೆಂದು ಹೆಸರಾಗಿದೆ. ಈ ಬಸದಿಯ

ದೈನಿಕ ಪೂಜಾವಿನಿಯೋಗದ ಬಗ್ಗೆ ಸರ್ಕಾರದಿಂದ 12-0-0 ರೂ. ತಸ್ತೀಕವೂ ಎಡಕಣ ಬಿರ್ಮಣ ಶೆಟ್ರಿಂದ ೪ ಮುಡಿ ಅಕ್ಕಿಯೂ ದೊರೆಯುತ್ತಿದೆ.

## (೩) ಬಿನ್ನಾಣಿ ಬಸದಿ

ಈ ಬಸದಿಯನ್ನು ಅದೇ ರಾಜನ ಕಿರಿಯರಾಣಿಯಾದ ಬಿನ್ನಾಣಿ ಎಂಬವಳು ಕಟ್ಟಿಸಿದ ಕಾರಣ 'ಬಿನ್ನಾಣಿ ಬಸದಿ' ಎಂದು ಹೆಸರು. ಅದೇ ಸಂವತ್ಸರವೇ ಇದರ ನಿರ್ಮಾಣಸಮಯ ಇಲ್ಲಿ ಹದಿನಾರನೆಯ ತೀರ್ಥಂಕರರಾದ ಶ್ರೀ ಶಾಂತಿನಾಥ ಸ್ವಾಮಿಯ ಕಂಚಿನ ಮೂಲವಿಗ್ರಹವಿದೆ. ಇದರ ದೈನಿಕ ಪೂಜಾವಿನಿಯೋಗಕ್ಕೋಸ್ಕರ ಸರ್ಕಾರದಿಂದ 16—0—0 ರೂಪ್ಯಾಗಳು ಮಾತ್ರ ತಸ್ತೀಕವಿದೆ.

## (೪) ಶ್ರೀ ಪಾರ್ಶ್ವನಾಥ ಬಸದಿ

ಶ್ರೀ ಗೋಮಟೇಶ್ವರ ಮೂರ್ತಿಯ ಹೊರ ಅಂಗಣದಲ್ಲಿ ಹಿಂಬದಿ ಪೂರ್ವಾಭಿಮುಖವಾಗಿ ಈ ಬಸದಿಯಿದೆ. ಇದಕ್ಕೆ ಸುಂದರವಾದ ಪ್ರಾಕಾರವೂ ಇದೆ. ಈ ಬಸದಿಯ ಶಿಲಾಲೇಖವು ಸಂಪೂರ್ಣವಾಗಿ ಸವೆದು ಹೋಗಿರುವುದರಿಂದ ಇದನ್ನು ಯಾರು ಯಾವಾಗ ಕಟ್ಟಿಸಿದರೆಂದು ತಿಳಿಯಲು ಆಧಾರವಿಲ್ಲ. ಇಲ್ಲಿ ೨೩ನೆಯ ತೀರ್ಥಂಕರರಾದ ಶ್ರೀ ಪಾರ್ಶ್ವನಾಥ ಸ್ವಾಮಿಯ ಶಿಲಾವಿಗ್ರಹವು ಕಾಯೋತ್ಸರ್ಗದಿಂದಿದೆ. ಈ ಬಸದಿಯು ಬಹಳ ಜೀರ್ಣವಾಗಿದ್ದುದರಿಂದ ಈ ವರ್ಷ ಮೂಡಬಿದ್ರೆ ಮಠದ ಶ್ರೀಗಳವರು ಸಹಸ್ರಾರು ರೂಪ್ಯಾಗಳ ವೆಚ್ಚದಿಂದ ಜೀರ್ಣೋದ್ಧಾರವನ್ನು ಮಾಡಿಸಿರುತ್ತಾರೆ. ಇಲ್ಲಿಯ ದೈನಿಕ ಪೂಜಾವಿನಿಯೋಗಾದಿಗಳ ಬಗ್ಗೆ ಸರ್ಕಾರದಿಂದ 26—0—0 ರೂಪ್ಯಾ ತಸ್ತೀಕವೂ ವಾರಗುತ್ತಿನಿಂದ ೮ ಮುಡಿ ಅಕ್ಕಿಯೂ ಮೂಡಬಿದ್ರೆ ಮಠದಿಂದ ೧೬ ಮುಡಿ ಅಕ್ಕಿಯೂ ದೊರೆಯುತ್ತಿದೆ

---

(೩) ಈ ಬಸದಿಯನ್ನು ಕಟ್ಟಿಸಿದ ಪಾಂಡ್ಯಕ್ಕ ಮತ್ತು ಮಲ್ಲಿದೇವಿಯರಿಬ್ಬರೂ ಬಿನ್ನಾಣಿಯ ಹಿರೆಸವತಿಗಳೆಂಬುದರಿಂದ ಅಕ್ಕಂದಿರಾಗುವುದರಿಂದಲೂ ಅಥವಾ ರಾಣಿಯರ ಹೆಸರಿನ ಗೌರವಾರ್ಥವಾಗಿ 'ಅಕ್ಕ' ಎಂಬ ಪರಪದವನ್ನು ಸೇರಿಸುವ ರೂಢಿಯಿರುವುದರಿಂದಲೂ, ಅಥವಾ ಪಾಂಡ್ಯಕ್ಕನ ಮತ್ತು ಮಲ್ಲಿಯಕ್ಕನ ಬಸದಿ ಎಂಬುದಕ್ಕೆ ಬದಲಾಗಿ ಅಕ್ಕಂಗಳ ಬಸದಿ ಎಂಬುದಾಗಿರಲೂ ಬಹುದು.

## (೫) ಶ್ರೀ ಶಾಂತೀಶ್ವರ ಬಸದಿ

ಇದು ಪೂರಾ ಕಗ್ಗಲ್ಲಿನಿಂದ ಕಟ್ಟಲ್ಪಟ್ಟಿರುವುದರಿಂದ ಇದಕ್ಕೆ 'ಕಲ್ಲು ಬಸದಿ' ಎಂದೂ ವೇಣೂರಲ್ಲಿನ ಎಲ್ಲಾ ಬಸದಿಗಳಲ್ಲಿ ಇದು ಬಹಳ ದೊಡ್ಡದಾಗಿ ಎತ್ತರವೂ ವಿಶಾಲವೂ ಆದ ಅಂಗಣದ ಮೇಲಿರುವುದರಿಂದ ಇದನ್ನು 'ದೊಡ್ಡ ಬಸದಿ' ಎಂದೂ 'ಮೇಗಿನ ಬಸದಿ' ಎಂದೂ ಕರೆಯುವರು. ಇಲ್ಲಿ ೧೬ನೆಯ ತೀರ್ಥಂಕರರಾದ ಶ್ರೀ ಶಾಂತಿನಾಥಸ್ವಾಮಿಯ ಮೂಲವಿಗ್ರಹವಿರುವುದರಿಂದ ಇದಕ್ಕೆ ಶಾಂತೀಶ್ವರ ಬಸದಿಯೆಂದೂ ಹೇಳುವರು. ಮಧುರಕ್ಕದೇವಿಯ ಶಿಲಾಲೇಖದಲ್ಲಿ ಹೇಳಿರುವ ಶಾಂತೀಶ್ವರ ಸ್ವಾಮಿಯ ಚೈತ್ಯಾಲಯವೆಂದರೆ ಇದೇ; ಇದು ಪೂರ್ವಾಭಿಮುಖವಾಗಿದೆ. ಇಲ್ಲಿಯ ಮೂಲವಿಗ್ರಹವು ಕರಿ ಶಿಲೆಯಿಂದ ಮಾಡಲ್ಪಟ್ಟುದೂ ಸುಮಾರು ೫ ಅಡಿ ಎತ್ತರವೂ(*) ಅಷ್ಟಮಹಾಪ್ರಾತಿಹಾರ್ಯಸಹಿತವೂ ಅತಿ ಸುಂದರವೂ ಆದ ಮೂರ್ತಿಯಾಗಿದೆ. ಇದರ ಮುಖದಿಂದ ನಗು ಮಿನುಗುವಂತಿದೆ. ಇದರ ಅಂಗೋಪಾಂಗರಚನಾಸೌಷ್ಟವವು ಅಂದಿನ ಶಿಲ್ಪಕಲಾ ನೈಪುಣ್ಯವನ್ನು ತೋರಿಸುವಂತಿದೆ. ಇಂತಹ ಸುಂದರ ಮೂರ್ತಿಯು ಅನ್ಯತ್ರ ದೊರೆಯುವುದು ಬಲು ದುರ್ಲಭ; ಈ ಮೂರ್ತಿಯ ಅಕ್ಕಪಕ್ಕಗಳಲ್ಲಿ ಗರುಡ ಮತ್ತು ಮಹಾಮಾನಸಿ ಯಕ್ಷಯಕ್ಷಿಗಳ ಸುಂದರವಾದ ಮೂರ್ತಿಗಳಿವೆ.

ಈ ಬಸದಿಯ ಕೋಟೆಯ ಹೊರಗಡೆ ವಿಶಾಲವಾದ ಅಂಗಣದಲ್ಲಿರುವ ಮಾನಸ್ತಂಭದ ಕೆತ್ತನೆಯ ಕೆಲಸವು ಬಲು ಮನೋಹರವಾಗಿದೆ. ಇದರಲ್ಲಿ ೨೪ ತೀರ್ಥಂಕರರ ಮೂರ್ತಿಗಳನ್ನು ಸುಂದರವಾಗಿ ನಿರ್ಮಾಪಿಸಿದ್ದಾರೆ. ಈ ಬಸದಿಯು ಸುತ್ತಣ ನೆಲತಳದಿಂದ ಎತ್ತರದಲ್ಲಿರುವುದರಿಂದ ಹಲಕೆಲ ಮೆಟ್ಟಲುಗಳನ್ನೇರಿ ಒಳಹೋಗುತ್ತಲೇ ಇದಿರಲ್ಲಿ ಕಂಡುಬರುವ ನಟ್ಟನಡುವಣ ಬಸದಿಯೇ ಶಾಂತೀಶ್ವರ ಬಸ್ತಿ. ಇದರಲ್ಲಿ ಮೂರು ಅಂತಸ್ತುಗಳಿವೆ. ಇದರ ಗೋಡೆ ಮಾಡು ಮೊದಲಾದುವೆಲ್ಲವೂ ಕರಿಯ ಕಲ್ಲಿನಿಂದಲೇ ಮಾಡಲ್ಪಟ್ಟವೆ. ಈ ಬಸದಿಯ ಹೊರಪಾರ್ಶ್ವ

---

(*) ಅಶೋಕವೃಕ್ಷ, ಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಸಿಂಹಪೀಠ, ಪ್ರಭಾಮಂಡಲ, ದುಂದುಭಿ, ಮುಕ್ಕೊಡೆ ಇವುಗಳಿಗೆ ಅಷ್ಟಮಹಾಪ್ರಾತಿಹಾರ್ಯಗಳೆಂದು ಹೆಸರು. ಇವು ಪ್ರತಿಯೊಂದು ಜಿನಪ್ರತಿಮೆಗಳಲ್ಲಿರಬೇಕು.

ದಲ್ಲಿ ೨ ಶಿಲಾಶಾಸನಗಳಿವೆ. ಇವುಗಳಲ್ಲಿ ಶಾ. ಶ. ೧೪೧೧ನೆಯ ಸೌಮ್ಯ ಸಂ||ರದ (ಕ್ರಿ. ಶ. 1489)ಲ್ಲಿ ಈ ಬಸದಿಯು ನಿರ್ಮಿಸಲ್ಪಟ್ಟಿದೆಯೆಂದೂ, ಈ ವೇಣೂರು ಸೀಮೆಗೆ 'ಪುಂಜಳಿಕೆಯ ರಾಜ್ಯ'ವೆಂಬ ಹೆಸರಿದೆಯೆಂದೂ ಉಲ್ಲಿಖಿತವಾಗಿದೆ. ಈ ಬಸದಿಯ ಪೂಜಾವಿನಿಯೋಗಾದಿಗಳಿಗೆ ಸರ್ಕಾರದಿಂದ 90—0—0 ರೂಪ್ಯಾ ತಸ್ತೀಕವೂ ಬುಳಕಾರದಿಂದ ೩ ಮುಡಿ ಅಕ್ಕಿಯೂ ಇದೆ.

## (೬) ಮೇಗಿನನೆಲೆ ಶ್ರೀ ವರ್ಧಮಾನಸ್ವಾಮಿ

ಈ ಪೂರ್ವೋಕ್ತವಾದ ಶಾಂತೀಶ್ವರ ಬಸದಿಯ ೨ನೆಯ ಅಂತಸ್ತಿನಲ್ಲಿ ಶ್ರೀ ವರ್ಧಮಾನಸ್ವಾಮಿಯ ಕಂಚಿನ ಪ್ರಭಾವಲಯಸಹಿತವಾದ ಮೂಲ ವಿಗ್ರಹವು ಅತಿ ಸುಂದರವಾಗಿದೆ. ಇವರು ೨೪ನೆಯ ತೀರ್ಥಂಕರರು. ಈ ನಡುವಣ ನೆಲೆಯ ಗುಪ್ತಗೃಹದಲ್ಲಿ ಅನೇಕ ಜಿನಪ್ರತಿಮೆಗಳನ್ನೂ ಪೂಜಾ ವಿನಿಯೋಗಕ್ಕನುಕೂಲವಾದ ಪಾತ್ರಗಳನ್ನೂ ಭದ್ರತೆಯಿಂದಿರಿಸಿರುತ್ತಾರೆ. ಮೂರನೆಯ ಅಂತಸ್ತಿನಲ್ಲಿ ಶ್ರೀ ಪಂಚಪರಮೇಷ್ಠಿ—ಚಂದ್ರನಾಥಸ್ವಾಮಿಯ ಶಿಲಾವಿಗ್ರಹವು ಬಲು ಮನೋಹರವಾಗಿದೆ.

## (೭) ತೀರ್ಥಕರ ಬಸದಿ

ಇದು ಶಾಂತೀಶ್ವರ ಬಸದಿಯ ಬಲಪಕ್ಕದಲ್ಲಿದೆ. ಇದರಲ್ಲಿ ಶಿಲಾಮಯವಾದ ೨೪ ತೀರ್ಥಂಕರರ ನಿಲುಮೂರ್ತಿಗಳಿರುವುದರಿಂದ ಇದಕ್ಕೆ 'ತೀರ್ಥಕರ ಬಸದಿ'ಯೆಂದೂ 'ಹರಿಪೀಠ'ವೆಂದೂ ಹೆಸರು. ಇಲ್ಲಿ ಎಡ ಬಲಗಳಲ್ಲಿ ಪದ್ಮಾವತಿದೇವಿಯ ಮತ್ತು ಸರಸ್ವತಿದೇವಿಯ ಮೂರ್ತಿಗಳಿರುವುದರಿಂದ ಇದಕ್ಕೆ ಅಮ್ಮನವರ ಬಸ್ತಿ ಎಂದೂ ಕರೆಯುವರು. ಈ ಬಸದಿಯು ಉತ್ತರಾಭಿಮುಖವಾಗಿದೆ. ಇದರ ದ್ವಾರಬಂಧವು ಬಳಪದ ಕಲ್ಲಿಂದ ಮಾಡಲ್ಪಟ್ಟಿದೆ. ಇದರಲ್ಲಿ ಹಲವಿಧದ ಕೆತ್ತನೆಯ ಲತೆಗಳು ಮಾಡಲ್ಪಟ್ಟು ಇದರ ಕೆಲಸವು ಬಲುರಮಣೀಯವಾಗಿದೆ. ಇಂತಹ ಕೆತ್ತನೆಯು ನಮ್ಮ ಜಿಲ್ಲೆಯ ಲ್ಲಿ ಎಲ್ಲಿಯೂ ಇಲ್ಲವೆಂದರೂ ತಪ್ಪೆನಿಸದು. ಈ ಬಸದಿಯು ಪೂರಾ ಕಗ್ಗಲ್ಲಿನಿಂದಲೇ ಮಾಡಲ್ಪಟ್ಟಿದೆ. ಈ ಬಸದಿಯ ಮೂಡಣ ಗೋಡೆಗೆ ಅನಿಸಿರುವ ಒಂದು ಬಳಪದ ಕಲ್ಲಲ್ಲಿ ೩ನೇ ಮಧುರಕ್ಕದೇವಿಯ ಶಾ. ಶ. 1544ನೆಯ ದುರ್ಮತಿ ಸಂ||ರದ (ಕ್ರಿ. ಶ. 1621) ಶಾಸನವಿದೆ.

ಶಾಸನವನ್ನು ಕೊರಸಿ 329 ವರ್ಷಗಳು ಕಳೆದುವಾದರೂ ಇದರ ಲೇಖವು ನವೀನವಾಗಿಯೂ ಚೊಕ್ಕಟವಾಗಿಯೂ ಇದೆ. ಈ ಬಸದಿಯ ವಿನಿಯೋಗಕ್ಕೆ ಸರ್ಕಾರದಿಂದ 16—0—0 ರೂಪಾಯಿ ತಸ್ತೀಕವೂ ಭಜಕರ ಧರ್ಮವೂ ಇದೆ.

### (೮) ಶ್ರೀ ಆದೀಶ್ವರಸ್ವಾಮಿ ಬಸದಿ

ಶಾಂತೀಶ್ವರ ಬಸದಿಯ ಎಡಪಕ್ಕದಲ್ಲಿ ಬಲು ಚಿಕ್ಕದಾದ ಇದೊಂದು ಬಸದಿ. ಇಲ್ಲಿ ಪದ್ಮಾಸನದಿಂದ ಧ್ಯಾನಮಗ್ನವಾಗಿ ಕುಳಿತಿರುವ ಕರಿಶಿಲೆಯ ಶ್ರೀ ಆದೀಶ್ವರಸ್ವಾಮಿಯ ವಿಗ್ರಹವು ಬಹಳ ಮನೋಹರವಾಗಿದೆ. ಈ ಬಸದಿಯನ್ನು ಯಾರು ಯಾವಾಗ ನಿರ್ಮಾಪಿಸಿದರೆಂದು ಶಿಲಾಲೇಖವಿಲ್ಲ. ಇಲ್ಲಿಯ ವಿನಿಯೋಗಕ್ಕೆ ರೂ. 8—6—0 ಮಾತ್ರ ತಸ್ತೀಕವಿದೆ.

## ೩. ವೇಣೂರಲ್ಲಿಯ ಬಸದಿಗಳ ನಿರ್ಮಾಣಕಾಲ

| | ಹೆಸರು | ನಿರ್ಮಾಣ ಸಮಯ | ಎಷ್ಟು ವರ್ಷ ಗಳಾದುವು |
|---|---|---|---|
| 1 | ಶ್ರೀ ಗೋಮಟೇಶ್ವರ ಸ್ವಾಮಿಯ ಪ್ರತಿಷ್ಠೆ | ಕ್ರಿ. ಶ. 1604— | 346 |
| 2 | ಅಕ್ಕಂಗಳಬಸ್ತಿ ಚಂದ್ರನಾಥ ಸ್ವಾಮಿ | ,, ,, | ,, |
| 3 | ಬಿನ್ನಾಣಿಬಸ್ತಿ ಶ್ರೀ ಶಾಂತೀಶ್ವರ ಸ್ವಾಮಿ | ,, ,, | ,, |
| 4 | ಶ್ರೀ ಪಾರ್ಶ್ವನಾಥಬಸ್ತಿ | ಇಲ್ಲಿಯ ಶಿಲಾಲೇಖ | ಪೂರ್ಣ ಸವೆದು ಹೋಗಿದೆ |
| 5 | ದೊಡ್ಡ ಬಸ್ತಿ ಶಾಂತೀಶ್ವರ ಸ್ವಾಮಿ | ಕ್ರಿ. ಶ. 1489 | 461 |
| 6 | ಮೋಗಿನನೆಲೆ ಶ್ರೀ ವರ್ಧಮಾನ ಸ್ವಾಮಿ | ,, ,, | ,, |
| 7 | ತೀರ್ಥಕರ (ಅಮ್ಮನವರ) ಬಸ್ತಿ | ,, 1537 | 413 |
| 8 | ಆದೀಶ್ವರಸ್ವಾಮಿ ಬಸ್ತಿ | ಇಲ್ಲಿ ಶಿಲಾಲೇಖವಿಲ್ಲ | |

## ೪. ವೇಣೂರಲ್ಲಿ ಧರ್ಮಸೇವೆಯ ನಿಯಮಗಳು

| | |
|---|---|
| ಶ್ರೀ ಗೋಮಟೇಶ್ವರ ಮೂರ್ತಿಯ ಪಂಚಾಮೃತ ಪಾದಾಭಿಷೇಕಕ್ಕೆ | 25—0—0 |
| ,, ,, ಕ್ಷೀರಾಭಿಷೇಕಕ್ಕೆ ,, | 5—0—0 |
| ಇತರ ಬಸ್ತಿಗಳಲ್ಲಿ ಕ್ಷೀರಾಭಿಷೇಕ ಪೂಜೆಗೆ................ | 4—0—0 |
| ,, ,, ಪಂಚಾಮೃತಾಭಿಷೇಕ ಪೂಜೆಗೆ................ | 16—0—0 |
| ಹಂಪೀಠದಲ್ಲಿ ೨೪ ತೀರ್ಥಂಕರರಿಗೆ ಕ್ಷೀರಾಭಿಷೇಕ ಪೂಜೆಗೆ | 8—0—0 |
| ರಥೋತ್ಸವಕ್ಕೆ.... .................................... | 50—0—0 |

### ಶ್ರೀ ಮಹಾಲಿಂಗೇಶ್ವರ ದೇವಸ್ಥಾನ

ಹಾಳುಬಿದ್ದಿರುವ ಅರಮನೆಯ ಸ್ಥಾನದಿಂದ ಮುಂದುಗಡೆಯಲ್ಲಿ ಸ್ವಲ್ಪ ಮೇಲೇರಿ ಮುಂದಕ್ಕೆ ಹೋಗುತ್ತಲೇ ಈ ದೇವಸ್ಥಾನವಿದೆ. ಇದು ಮೂಡು ಮುಖವಾಗಿದೆ. ನಡುವಣ ಗುಡಿಗೆ ತಾಮ್ರವನ್ನು ಆಚ್ಛಾದಿಸಿದೆ. ಇದರ ಗರ್ಭಗುಡಿಯ ಕಲ್ಲಲ್ಲಿ ಶಾ. ಶ. ೯೮೦ನೆಯ ಪ್ರಭವ ಸಂ|ರದ ಎಂಬುದಷ್ಟು ತೋರುವುದು. ಯಾರದೆಂದು ತಿಳಿಯುವುದಿಲ್ಲ. ಈ ಮಹಾಲಿಂಗೇಶ್ವರನು ಅಜಿಲರಸರ ಕುಲದೇವರೆಂದು ಹೇಳುವರು. ಈ ದೇವಸ್ಥಾನದ ಮುಂಗಡೆಯಿರುವ ಒಂಡು ನಂದಿಸ್ತಂಭದಲ್ಲಿ ಇದನ್ನು ಓರ್ವ ಶೆಟ್ಟಿಯು ಮಾಡಿಸಿದ್ದೆಂದು ಕನ್ನಡಲಿಪಿಯಲ್ಲಿದೆ. ಯಾರು, ಯಾವಾಗ ಎಂದಿಲ್ಲ. ಇಲ್ಲಿ ವರ್ಷಂಪ್ರತಿ ರಥೋತ್ಸವ ಜಾತ್ರೆಯೂ ಸೋಣ — ಸಿಂಹಮಾಸದಲ್ಲಿ ಬ್ರಾಹ್ಮಣರಿಗೆ ಸಂತರ್ಪಣೆಯೂ ಇದೆ. ಇಲ್ಲಿಯ ನಿತ್ಯಪೂಜಾದಿವಿನಿಯೋಗಗಳಿಗೆ ಸರ್ಕಾರದಿಂದ 200—0—0 ರೂಪಾಯಿ ತಸ್ತೀಕವೂ ೨೦ ಮುಡಿ ಅಕ್ಕಿ ಬರುವ ಜಮೀನಿನ ಉತ್ಪತ್ತಿಯೂ ದೊರೆಯುತ್ತಿದೆ.

## ೫. ಅಜಿಲರಸರ ಸಂಕ್ಷಿಪ್ತವಂಶಪರಿಚಯ

ಈ ತುಳುರಾಜ್ಯದಲ್ಲಿ ಆಳಿದ ಜೈನರಾಜರ ವಂಶಗಳಲ್ಲಿ ವೇಣೂರಲ್ಲಿ ಆಳಿದ ಅಜಿಲರ ವಂಶವು ಒಂದಾಗಿದೆ. ಈ ಮನೆತನದವರಿಗೆ 'ಅಜಿಲ'

(೫) ಇದನ್ನು ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ ಮತ್ತು ವೇಣೂರಿನ ಶಿಲಾಶಾಸನವೆಂಬ ಗ್ರಂಥಗಳ ಆಧಾರದಿಂದ ಸಂಗ್ರಹಿಸಿ ಬರೆದುದಾಗಿದೆ.

ರೆಂದು ಹೆಸರಿದ್ದಿತು. ಇದರಲ್ಲಿ ಕ್ರಿ. ಶ. 1154ರಿಂದ 1180ರ ವರೆಗೆ ಆಳಿದ ತಿಮ್ಮಣ್ಣಾಜಿಲರಿಂದ ಹಿಂದಣ ಈ ಕುಟುಂಬದ ಇತಿಹಾಸವು ಇನ್ನೂ ಗೊತ್ತಿಲ್ಲವು. ಈ ತಿಮ್ಮಣ್ಣಾಜಿಲರು ಜೈನಧರ್ಮಾವಲಂಬಿಗಳಾಗಿದ್ದರೂ ಇವರು ರಾಜರಾಗಿರುವ ಕಾರಣ ಎಲ್ಲಾ ಧರ್ಮದವರನ್ನೂ ಸಮಾನದೃಷ್ಟಿಯಿಂದ ನೋಡುತ್ತಿದ್ದರು. ಅತ ಏವ ಇವರ ಮುದ್ರೆಯಲ್ಲಿ 'ಶ್ರೀ ಮಹಾಲಿಂಗೇಶ್ವರ ಪ್ರಸನ್ನ' ಎಂದಿದೆ. ಅದು ಮಹಾಲಿಂಗೇಶ್ವರನೆಂಬ ಶಿವಲಿಂಗದ ಹೆಸರು ಆಗಿದೆ.

ಈ ವಂಶದವರ ರಾಜಧಾನಿಯು ಫಲ್ಗುನೀತೀರದಲ್ಲಿರುವ ವೇಣೂರಾಗಿದ್ದಿತು. ಇವರಿಗೆ ವೇಣೂರು, ಅಳದಂಗಡಿ, ಕೇಳ, ಬರಯ ಈ ನಾಲ್ಕು ಸ್ಥಾನಗಳಲ್ಲಿ ಅರಮನೆಗಳಿದ್ದುವು. ಈಗ ವೇಣೂರಿನ ಅರಮನೆಯು ಪೂರ್ಣ ಹಾಳಾಗಿದೆ. ಶ್ರೀ ಗೋಮಟೇಶ್ವರ ಸ್ವಾಮಿಯು ಬೆಟ್ಟದ ಬಸದಿಯ ತಗ್ಗಾದ ಮೈದಾನಿನಲ್ಲಿ ಈ ಹಾಳುಬಿದ್ದ ಅರಮನೆಯು ಸ್ಥಳವನ್ನೂ ಹೆಬ್ಬಾಗಿಲಿನ ಹತ್ತಿರ ಕಗ್ಗಲ್ಲಿನಿಂದ ಮಾಡಲ್ಪಟ್ಟಿರುವ ಮೂರು ಅಡಿ ಎತ್ತರವಾದ ಎರಡು ಆನೆಗಳನ್ನೂ ನೋಡಬಹುದು. ಈ ಅರಮನೆಗೆ ೭ ಅಂತಸ್ತುಗಳಿದ್ದುವಂತೆ. ಇದರ ಆಗ್ನೇಯಕ್ಕೆ ಮಹಾಲಿಂಗೇಶ್ವರ ದೇವಸ್ಥಾನವಿದೆ. ಶ್ರೀ ಪಾರ್ಶ್ವನಾಥ ಬಸ್ತಿಯಿಂದ ಪೂರ್ವಕ್ಕೆ ಜೈನರ ಪೇಟೆಯಿದೆ. ಈ ಪೇಟೆಯ ಮಧ್ಯ ಮಾರ್ಗಕ್ಕೆ ಅರಮನೆಯಿಂದ ಬರುವ ರಸ್ತೆಯು ಬಂದು ಕೂಡಿದೆ. ಈ ರಸ್ತೆಯು ಶ್ರೀ ಶಾಂತೀಶ್ವರ ಬಸ್ತಿಯ ವರೆಗಿದೆ.

ಈ ತಿಮ್ಮಣ್ಣಾಜಿಲನು ತನ್ನ ಹಿರಿಯರಿಂದ ಹೊಯ್ಸಳ ರಾಜನಾದ ವಿಷ್ಣುವರ್ಧನನು ಸೆಳೆಕೊಂಡ ತನ್ನ ರಾಜ್ಯವನ್ನು ಕ್ರಮೇಣ ಮರಳಿ ಸಂಪಾದಿಸಿಕೊಂಡು ವೇಣೂರಲ್ಲಿ ಹಾಳುಬಿದ್ದ ತನ್ನ ಹಿರಿಯರ ಅರಮನೆಯನ್ನು ಮರಳಿ ಕಟ್ಟಿಸಿ ಅಲ್ಲಿ ವಾಸಮಾಡುತ್ತಿದ್ದನು. ಇವನ ಮೊದಲ್ಗೊಂಡು ಅಜಿಲವಂಶದರಸರ ಸಂಕ್ಷಿಪ್ತ ಪರಿಚಯವು ಈ ರೀತಿಯಾಗಿದೆ:—

(೧) ೧ನೆಯ ತಿಮ್ಮಣ್ಣಾಜಿಲನು ಕ್ರಿ. ಶ. 1154ರಿಂದ 1180ರ ವರೆಗೆ ರಾಜ್ಯವಾಳುವಾಗ ವೇಣೂರಿನ ಹಾಳುಬಿದ್ದ ಅರಮನೆಯನ್ನು ದುರುಸ್ತಿ ಪಡಿಸಿ ೭ ಅಂತಸ್ತಿನ ಮಾಳಿಗೆಯನ್ನು ಕಟ್ಟಿಸಿದನು. ಮತ್ತು ವೇಣೂರು, ಕೇಳ, ಪೆರಂಜೆ ಮತ್ತು ಅಜ್ಜಬೆಟ್ಟು ಈ ನಾಲ್ಕು ಮಾಗಣೆಗಳನ್ನು ಸ್ವಾಧೀನ ಪಡಿಸಿಕೊಂಡನು.

(೨) ಪೂಂಜನ ಆಳಿಕೆ—ಕ್ರಿ. ಶ. 1180ರಿಂದ 1186. ಈ ಶಿವಮ್ರಂಣಾಜಿಲನಿಗೆ ಚೆನ್ನಮ್ಮ ಮತ್ತು ಮದುರಕ್ಕ ದೇವಿಯರೆಂಬ ಇಬ್ಬರು ಸೊಸೆಯಂದಿರನ್ನು ಹೊರತು ಬೇರಾವ ಕುಟುಂಬದವರಿದ್ದಿಲ್ಲ. ಇವರನ್ನು ಗಟ್ಟದ ಮೇಲಣ ಗಂಗವಂಶೀಯರಾದ ಗೋವಿಂದರಾಯಪ್ಪ ಮತ್ತು ಚಾಮುಂಡರಾಯ ಎಂಬಿಬ್ಬರಿಗೆ ಕೊಟ್ಟು ಮದುವೆಯಾಗಿದ್ದಿತು. ಶಿವಮ್ರಂಣಾಜಿಲನು ಸಾಯುವಾಗ ತನ್ನ ಸೊಸೆಯಂದಿರಿಗೆ ಮಕ್ಕಳಿಲ್ಲದ ಕಾರಣ ಹೆಂಗುಸರನ್ನು ಪಟ್ಟದಲ್ಲಿ ಕುಳ್ಳಿರಿಸುವುದು ಯೋಗ್ಯವಲ್ಲವೆಂದು ಸೀಮೆಯವರು ಯೋಚಿಸುತ್ತಿರುವುದನ್ನು ಕೇಳಿ ತಾವಿಲ್ಲಿರುವುದರಿಂದ ಅಪಾಯವುಂಟೆಂದು ಬಗೆದು ಅವರು ತಮ್ಮ ಗಂಡಂದಿರ ಮನೆಗೆ ಹೋಗಿ ಅಲ್ಲಿಂದ 'ಬನವಾಸಿಗೆ' ಹೋಗಿ ಕದಂಬ ವಂಶೀಯ ರಾಜನಾದ ಕಾಮದೇವನೊಡನೆ ದೂರಿತ್ತರು. ಆ ಕಾಲದಲ್ಲಿ ಈ ತುಳುನಾಡು ಪಡುವಣ ಚಾಳುಕ್ಯ ವಂಶದ ಸಾಮ್ರಾಟನಾದ ತ್ರಿಭುವನಮಲ್ಲ ನಾಲ್ವಡಿ ಸೋಮೇಶ್ವರನ ಒಡೆತನಕ್ಕೆ ಒಳಪಟ್ಟದ್ದು ಆತನ ಮಹಾಮಂಡಲಿಕನಾದ ಕದಂಬ ವಂಶದ ಕಾಮದೇವನು ತನ್ನ 'ವನವಾಸಿ'ಯ ರಾಜಧಾನಿಯಾದ ಇದನ್ನಾಳುತ್ತಿದ್ದನು. ಆ ಕಾಲದಲ್ಲಿ ಈ ಅಕ್ಕತಂಗಿಯರು ವೇಣೂರಿನಿಂದ ಹೊರಟುಹೋದ ಮೇಲೆ ಆ ಸೀಮೆಯವರು 'ಪಿಲತಬೆಟ್ಟು' ಎಂಬ ಗ್ರಾಮದ 'ಪೂಂಜ' ಎಂಬ ಮನೆತನದ ಬಂಟರ ಕುಟುಂಬದದನೊಬ್ಬನನ್ನು ತಮ್ಮ ಅರಸನನ್ನಾಗಿ ಆಯ್ದುಕೊಂಡು ಅವನಿಗೆ ಪಟ್ಟಕಟ್ಟಿದ್ದರು. ಆತನು ಆರು ವರ್ಷದ ವರೆಗೆ ರಾಜ್ಯವಾಳಿದನು. ಈ ಆರು ವರ್ಷಗಳಲ್ಲಿ ಮಾತ್ರ ಈ ಸೀಮೆಯಲ್ಲಿ ಅಜಿಲರ ಆಳಿಕೆಯಿದ್ದಿಲ್ಲವು. ಶಿವಮ್ರಂಣಾಜಿಲನ ಪಟ್ಟದ ಉಂಗುರವು ಸೇನಾಧಿಪತಿಯಾದ ಪೆರಂಜೆ ಗುತ್ತಿನ ಬಂಟನ ಕೈಯಲ್ಲಿತ್ತು. ಈ 'ಪೂಂಜ' ಹೆಸರುಳ್ಳ ಈತನಾಳಿದ ಕಾರಣವೇ ಅಂದಿನಿಂದ ಈ ಪಟ್ಟಕ್ಕೆ ಪೂಂಜಳಿಕೆಯ ಪಟ್ಟವೆಂದೂ, ಈ ರಾಜ್ಯಕ್ಕೆ ಪೂಂಜಳಿಕೆಯ ರಾಜ್ಯವೆಂದೂ ಹೆಸರಾಯಿತು.

ಬಳಿಕ ಕದಂಬವಂಶೀಯರು ನಮ್ಮ ತುಳುನಾಡಿಗೆ ದಂಡೆತ್ತಿ ಬರುತ್ತಲೇ ಅದನ್ನು ಕೇಳಿ ಪೂಂಜನು ಸೌಣಾಲು ಗ್ರಾಮಕ್ಕೆ ಓಡಿಹೋಗಿ ತನ್ನ ಆತ್ಮಹತ್ಯವನ್ನು ಮಾಡಿಕೊಂಡನು. ಅವನನ್ನು ದಹನಮಾಡಿದ ಗದ್ದೆಗೆ ಈಗಲೂ 'ಪೂಂಜಲತಿಮಾರು' ಎಂದು ಕರೆಯುವರು. ಪೂಂಜನು ವೇಣೂ

ರಿಗೆ ಹೋಗುವ ಮೊದಲು ಕೂತುಕೊಂಡ ಬಿಲ್ಲ ಮಂಜು ಮನೆಯ ಹತ್ತಿರ ಇರುವ ಕಟ್ಟೆಗೆ ಪೂಂಜಲಕಟ್ಟೆ ಎಂದು ಹೆಸರಾಯಿತು.

ಕಾಮದೇವನು ಮಧುರಕ್ಕದೇವಿಗೆ ಈ ವೇಣೂರಿನ ಪೂಂಜಳಿಕೆಯ ರಾಜ್ಯವನ್ನೂ ಅಳದಂಗಡಿ, ಸುಳ್ಕೇರು, ಈದು ಮೊದಲಾದ ೧೩ ಮಾಗಣೆ ಗಳನ್ನೂ ಸ್ವಾಧೀನಪಡಿಸಿ ಕೊಟ್ಟನು. ಈ ಮಧುರಕ್ಕದೇವಿಯು ತಾನೇ ಪಟ್ಟವೇರಿ ಆಳಿದಂತೆ ಕಾಣುವುದಿಲ್ಲ.

(೩) ಒಂದನೆಯ ರಾಯಕುಮಾರನು— ಕ್ರಿ. ಶ. 1186ರಿಂದ 1204ರ ವರೆಗೆ ರಾಜ್ಯವಾಳಿದನು. ಈತನ ಕಾಲದಲ್ಲಿ ಗಂಗವಾಡಿಗೆ ಹೋಗಿದ್ದ ಮದುರಕ್ಕ ಮತ್ತು ಚನ್ನಮ್ಮದೇವಿಯವರನ್ನು ಕಾಮದೇವನು ವೇಣೂರಿಗೆ ಬರಮಾಡಿ ಅಳದಂಗಡಿ ರಾಜ್ಯವನ್ನು ಸ್ವಾಧೀನಪಡಿಸಿ ಕೊಟ್ಟನು. ಬಳಿಕ ಮಧುರಕ್ಕದೇವಿಯು ಅಳದಂಗಡಿಯಲ್ಲೊಂದು ಅರ ಮನೆಯನ್ನೂ ಅರಮನೆಯ ಹತ್ತಿರ ಒಂದು ಜೈನ ಬಸದಿಯನ್ನೂ ಸೋಮ ನಾಥ ದೇವಾಲಯವನ್ನೂ ಕಟ್ಟಿಸಿದಳು. ಆಗ ವೇಣೂರಿನ ಅರಮನೆಯನ್ನು ಸ್ವಾಧೀನ ಪಡಿಸಿಕೊಂಡಳು. ಆಕೆಯ ಪುತ್ರನಾದ ರಾಯಕುಮಾರನಿಗೆ ಶಾ. ಶ. 1208ನೆಯ ಪರಾಭವ ಸಂ|ರದ ಕಾರ್ತಿಕ ಶು| ೪ರಲ್ಲು ಬಲು ವೈಭವದಿಂದ ವೇಣೂರಿನ ಪಟ್ಟವಾಯಿತು. ಆ ಸಮಯದಲ್ಲಿ ರಾಜ್ಯಭಾರದ ಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಪೆರಾಡಿ ಇರ್ವತ್ತೂರು ಮೊದಲಾದ ಸ್ಥಾನಗಳ ಬಲ್ಲಾಳರೂ ೧೩ ಮಾಗಣೆ ಮತ್ತು ಗ್ರಾಮ ಗುರಿಕಾರರೂ ಸೀಮೆಯ ಪ್ರಜೆಗಳೂ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಬಂದಿದ್ದರು. ಇನ್ನು ಮುಂದೆ ರಾಜ್ಯದಲ್ಲಿ ದಂಗೆ ಏಳದ ಹಾಗೆ ೧೩ ಮಾಗಣೆಗಳಲ್ಲಿರುವ ಶ್ರೀಮಂತರಾದ ಬೆಳ್ಳೂರು ಗುತ್ತು, ಅರುವದ ಗುತ್ತು, ಕುಕ್ಕೇಡಿ ಗುತ್ತು, ಪೆರಂಜೆ ಗುತ್ತು ಈ ನಾಲ್ಕು ಗುತ್ತಿನವರನ್ನು ಸೇನಾಧಿಪತಿಗಳನ್ನಾಗಿಯೂ, ರಾಜ್ಯಗುತ್ತಿನವರನ್ನಾಗಿಯೂ ನೇಮಿಸಿದನು. ಪಟ್ಟಾಭಿಷೇಕ ಕಾಲದಲ್ಲಿ ರಾಜನ ಕೈಹಿಡಿದು ಪಟ್ಟದ ಮಂಚದಲ್ಲಿ ಕುಳ್ಳಿರಿಸುವ ಅಧಿಕಾರವನ್ನು ಅರು ವದ ಗುತ್ತಿನವರಿಗೂ, ಪಟ್ಟದ ಉಂಗುರವನ್ನು ರಾಜನ ಕೈಯ್ಯ ಬೆರಳಿಗಿಡುವ ಅಧಿಕಾರವನ್ನು ಬೆಳ್ಳೂರು ಗುತ್ತಿನವರಿಗೂ, ಅರಸನ ಕೈಯಲ್ಲಿ ಪಟ್ಟದ ಕತ್ತಿಯನ್ನು ಕೊಡುವ ಅಧಿಕಾರವನ್ನು ಪೆರಂಜೆ ಗುತ್ತಿನವರಿಗೂ, ಪ್ರಧಾನ

ಅಧಿಕಾರವನ್ನು ವೇಣೂರಿನ ದೇವುನಾಯಿಕನ ಮನೆತನದವರಿಗೂ ಸೀಮೆಯವರ ಅನುಮತಿಯಂತೆ ಕೊಡಲಾಯಿತು.

ಈ ರಾಯಕುಮಾರನ ತರುವಾಯ ೩ನೆಯ ತಿಮ್ಮಣ್ಣಾಜಿಲ ಮೊದಲ್ಗೊಂಡು ೩ನೆಯ ರಾಯಕುಮಾರನ [ಕ್ರಿ. ಶ. ೧೩೦೫ರಿಂದ ೧೫೫೦] ವರೆಗೆ ಎಂಟು ಮಂದಿ ಅಜಿಲರು ಆಳಿದರು. ಅವರೆಲ್ಲರೂ ಎಷ್ಟೆಷ್ಟು ಕಾಲ ರಾಜ್ಯವಾಳಿದರೆಂದು ಅಜಿಲರ ವಂಶಾವಳಿಯಿಂದ ತಿಳಿಯಬಹುದು. ಅವರ ರಾಜ್ಯಶಾಸನಕಾಲದಲ್ಲಿ ವಿಶೇಷ ಉಲ್ಲೇಖನೀಯವಾದ ಕಾರ್ಯಗಳು ಜರಗಲಿಲ್ಲವು.

(೪) ೩ನೆಯ ರಾಯಕುಮಾರನು ಕಾಲವಾದ ನಂತರ ಶಾ. ಶ. ೧೫೭೩ನೆಯ ಸಾಧಾರಣ ಸಂ।ರದ ವೈಶಾಖ ಶು। ೫ರಲ್ಲಿ ಆತನ ತಂಗಿ ಪಾಂಡ್ಯಕ್ಕದೇವಿಯ ಮಗ ತಿಮ್ಮಣ್ಣಾಜಿಲನಿಗೆ ಪಟ್ಟವಾಯಿತು. ಅವನು ತಿಮ್ಮಣ್ಣಾಜಿಲರಲ್ಲಿ ನಾಲ್ಕನೆಯವನು. ಆತನು ಕ್ರಿ. ಶ. ೧೫೫೦ರಿಂದ ೧೬೧೦ರ ವರೆಗೆ ಆಳಿದನು. ಆತನ ಕಾಲದಲ್ಲಿ ವೇಣೂರು ಬಹಳ ಪ್ರಸಿದ್ಧಿಯನ್ನು ಹೊಂದಿದ್ದಿತು. ಅವನಿಗೆ ಪಾಂಡ್ಯಕ್ಕದೇವಿ ಯಾನೆ ವರ್ಧಮಾನಕ್ಕ, ಮಲ್ಲಿದೇವಿ ಮತ್ತು ಬಿನ್ನಾಣಿ ಎಂಬ ಮೂವರು ರಾಣಿಯರಿದ್ದರು.

ಶ್ರವಣಬೆಳುಗುಳದಲ್ಲಿ ತನ್ನ ಹಿರಿಯರ ವಂಶದವನಾದ ಚಾಮುಂಡರಾಯನು ಪ್ರತಿಷ್ಠಿಸಿದ ಗೋಮಟೇಶ್ವರನ ಮೂರ್ತಿಯಂತೆಯೇ ತನ್ನ ರಾಜ್ಯದಲ್ಲಿಯೂ ಒಂದು ಮೂರ್ತಿಯನ್ನು ಪ್ರತಿಷ್ಠಿಸಬೇಕೆಂದು ವೀರ ತಿಮ್ಮಣ್ಣಾಜಿಲನಿಗೆ ಇಚ್ಛೆಯುಂಟಾಯಿತು. ಆ ಸಮಯದಲ್ಲಿ ಈ ತುಳುನಾಡು ಶಿಲ್ಪಕಲೆಯಲ್ಲಿ ಬಹಳ ಉನ್ನತಿಯನ್ನು ಹೊಂದಿದ್ದಿತು. ವೀರಪಾಂಡ್ಯನ ರಾಜಧಾನಿಯಾದ ಕಾರ್ಕಳದಲ್ಲಿ ಪ್ರತಿಷ್ಠಿಸಿದ ಗೋಮಟೇಶ್ವರನ ಮೂರ್ತಿಯನ್ನು ಮಾಡಿದ ಶಿಲ್ಪಿ ಶಂಭು ಎಂಬ ಕಲ್ಲುಕುಟಿಗನ ಕುಟುಂಬದವನೊಬ್ಬನನ್ನು ಕರೆಯಿಸಿ ವೇಣೂರಿನ ಹತ್ತಿರವಿರುವ “ಕಲ್ಯಾಣಿ” ಎಂಬ ಸ್ಥಳದಲ್ಲಿರುವ ಕಗ್ಗಲ್ಲಿಂದ ಗೋಮಟೇಶ್ವರನ ಮೂರ್ತಿಯನ್ನು ತಯಾರಿಸಿ ಪ್ರತಿಷ್ಠೆಗೆ ಸಿದ್ಧಮಾಡಿಸಿದನು.

ಈ ಸಮಾಚಾರವು ಕಾರ್ಕಳ ಪಾಂಡ್ಯನಗರದಲ್ಲಿ ಆಳುತ್ತಿದ್ದ ದಾವಣಿ ಇಮ್ಮಡಿ ಭೈರವರಾಯನಿಗೆ ತಿಳಿಯುತ್ತಲೇ ತನ್ನ ಹಿರಿಯನಾದ ವೀರ

ಪಾಂಡ್ಯನ ಕೀರ್ತಿಗೆ ಕುಂದು ಬರುವುದೆಂದು ಯೋಚಿಸಿ, ಈ ವೀರ ತಿಮ್ಮ ಣ್ಣಾಜಿಲನು ತಯಾರಿಸಿದ ಗೋಮಟೇಶ್ವರನ ಮೂರ್ತಿಯನ್ನು ಪ್ರತಿಷ್ಠಿಸ ಕೂಡದೆಂದೂ ಅದನ್ನು ಕಾರ್ಕಳಕ್ಕೆ ಕಳುಹಿಸಿಕೊಡಬೇಕೆಂದೂ ಹೇಳಿ ಕಳುಹಿಸಿದನು. ಆಗ ವೀರ ತಿಮ್ಮಂಣ್ಣಾಜಿಲನು ಎಂತಹ ಕಷ್ಟಗಳು ಬಂದೊ ದಗಿದರೂ ತಾನು ಮಾಡಿಸಿದ ಮೂರ್ತಿಯನ್ನು ಪ್ರತಿಷ್ಠಿಸದೆ ಬಿಡೆನೆಂದು ಹೇಳಿ ಕಳುಹಿಸಿದನು. ಈ ಮಾತನ್ನು ಕೇಳಿ ಭೈರವರಾಯನು ಯುದ್ಧಕ್ಕೆ ಸನ್ನದ್ಧನಾಗಿ ಅಜಿಲರ ಗಡಿಯಾದ ನಾರಾವಿಗೆ ಬಂದು ದೇವಸ್ಥಾನ ಬಸದಿ ಮೊದಲಾದುವುಗಳನ್ನು ಸುಟ್ಟು ಊರನ್ನು ಸುಲಿಗೆ ಮಾಡಲಾರಂಭಿಸಿದನು. ಇದನ್ನು ಕೇಳಿ ವೀರ ತಿಮ್ಮಂಣ್ಣಾಜಿಲನೂ ಯುದ್ಧ ಸನ್ನದ್ಧನಾಗಿ ಯದ್ಯಪಿ ಭೈರವರಾಯನು ವೇಣೂರಿಗೆ ಬಂದರೂ ಆತನಿಗೆ ಈ ಮಹಾಮೂರ್ತಿಯು ಸಿಗಬಾರದೆಂದು ಅದನ್ನು ಅಲ್ಲಿಯೇ ನದಿಯ ಹೊಯ್ಗೆಯಲ್ಲಿ ಅಡಗಿಸಿದನು.

ಬಳಿಕ ತನ್ನ ಸೇನಾಧಿಪತಿಯಾದ ನಾರಾವಿ "ಕಾಂತು ಸಾಮಂಣಿ" ಎಂಬವನನ್ನು ಕಳುಹಿಸಿ ಭೈರವರಾಯನನ್ನು ಸೋಲಿಸಿ ಓಡಿಸಿದನು. ಬಳಿಕ ಆ ಮೂರ್ತಿಯನ್ನು ತೆಗೆಯಿಸಿ ಈಗಿರುವ ಸ್ಥಳದಲ್ಲಿ ಪ್ರತಿಷ್ಠಿಸಿ ದನು. ಈ ಗೋಮಟೇಶ್ವರನ ಮೂರ್ತಿಯ ಎಡಬಲ ದಿಕ್ಕಿನಲ್ಲಿರುವ ಶಿಲಾ ಲೇಖದಿಂದ "ಚಾಮುಂಡವಂಶದ ತಿಮ್ಮರಾಜನು ಶ್ರ. ಬೆಳುಗುಳದ ತನ್ನ ಗುರುಗಳಾದ ಶ್ರೀಚಾರುಕೀರ್ತಿ ಸ್ವಾಮಿಯವರ ಅಪ್ಪಣೆ ಪ್ರಕಾರ ಶ್ರೀ ಬಾಹುಬಲಿ ಸ್ವಾಮಿಯ ಪ್ರತಿಮೆಯನ್ನು ಶಾ. ಶ. ೧೫೨೫ನೆಯ ಶೋಭ ಕೃತು ಸಂ|ರದ ಫಾಲ್ಗುಣ ಶು| ೧೦ಯು (ಕ್ರಿ. ಶ. ೧೬೦೪ಯ ಮಾರ್ಚಿ ತಾರೀಕು ೧) ಗುರುವಾರ ದಿವಸದಂದು ಪ್ರತಿಷ್ಠಿಸಿದನೆಂದೂ, ಆತನ ತಾಯಿ ಪಾಂಡ್ಯಕ್ಕನೆಂದೂ, ಮಾವ ರಾಯಕುಮಾರನೆಂದೂ ಗೊತ್ತಾಗು ವುದು.

ಅದೇ ಸಂವತ್ಸರದಲ್ಲಿ ವೀರತಿಮ್ಮರಾಜನ ರಾಣಿಯರಾದ ಪಾಂಡ್ಯಕ್ಕ ದೇವಿ ಮತ್ತು ಮಲ್ಲಿದೇವಿ ಎಂಬೀರ್ವರು 'ಅಕ್ಕಂಗಳ ಬಸದಿ'ಯನ್ನೂ ಇನ್ನೊಬ್ಬ ರಾಣಿಯಾದ ಬಿನ್ನಾಣಿಯು ತನ್ನ ಹೆಸರಿನ 'ಬಿನ್ನಾಣಿ ಬಸದಿ' ಯನ್ನೂ ಕಟ್ಟಿಸಿ, ದೇವರ ಪ್ರತಿಷ್ಠಾಪೂರ್ವಕವಾಗಿ ಉಂಬಳಿಯನ್ನು ಬಿಟ್ಟಿ ರುತ್ತಾರೆಂದು ಅಲ್ಲಿರುವ ಎರಡು ಶಿಲಾಶಾಸನಗಳಿಂದ ತಿಳಿಯಬಹುದು.

ಈತನ ಶಾಸನಕಾಲದಲ್ಲಿ ಲಕ್ಷ್ಮಪ್ಪರಸ ಬಂಗರಾಜನೊಡನೆ ಇವನಿಗೆ ಕಲಹವುಂಟಾಗಿ ಇಬ್ಬರೂ ಯುದ್ಧಕ್ಕೆ ಸನ್ನದ್ಧರಾಗಲು ತಿಮ್ಮಂಣಾಜಿಲನ ಸೇನಾನಾಯಕನಾದ ಪೆರಂಜೆಗುತ್ತು ದೇವಪೂಂಜನೂ ಬಂಗರಾಜನ ಸೇನಾನಾಯಕನಾದ ಮಣಿಗುತ್ತಿನ ದುಗ್ಗಂಣಕೊಂಡೆಯೂ ಪರಸ್ಪರ ಯುದ್ಧಮಾಡಿಕೊಂಡು ದೇವಪೂಂಜನು ದುಗ್ಗಂಣಕೊಂಡೆಯನ್ನು ಸೋಲಿಸಿ, ಆತನ ತಲೆಯನ್ನು ಕಡಿದು ತಿಮ್ಮಂಣಾಜಿಲನಿಗೆ ತಂದೊಪ್ಪಿಸಿದನೆಂದು ಹೇಳುವರು.

ವಿಜಯನಗರದ ರಾಜ್ಯಭಾರವು ಕಳೆಗುಂದಿದ ಬಳಿಕ ಕನ್ನಡ ಜಿಲ್ಲೆಯು ಇಕ್ಕೇರಿ ನಾಯ್ಕರ ವಶವಾಯಿತು. ಕ್ರಿ. ಶ. ೧೭೦೮ರಲ್ಲಿ ಇಕ್ಕೇರಿ ವೆಂಕಟಪ್ಪ ನಾಯಕನು ಈ ಜಿಲ್ಲೆಗೆ ಬಂದು ಇಲ್ಲಿಯ ರಾಜರನ್ನು ಸ್ವಾಧೀನಪಡಿಸಿ ತನಗೆ ಕಪ್ಪಕೊಡುವಂತೆ ಮಾಡಿಕೊಂಡನು.

(೫) ಎರಡನೆಯ ಮುದುರಕ್ಕದೇವಿಯು ಕ್ರಿ. ಶ. ೧೬೭೦—೧೬೪೭ ವರೆಗೆ ರಾಜ್ಯವಾಳಿದಳು. ಆಕೆಯನ್ನು ಕಾರ್ಕಳದ ಭೈರವವಂಶದ ರಾಮನಾಥ ಅರಸನಿಗೆ ಕೊಟ್ಟು ಮದುವೆಯಾಗಿದ್ದಿತು. ಆ ರಾಮನಾಥ ಅರಸನು ವೇಣೂರು ಶಾಂತೀಶ್ವರ ಬಸ್ತಿಗೆ ೧೦೦ ವರಹ ಉತ್ಪತ್ತಿಯ ಜಮೀನನ್ನು ದಾನಶಾಸನಮಾಡಿರುವನೆಂದು ಅಲ್ಲಿಯ ಶಿಲಾಲೇಖದಲ್ಲಿದೆ. ಈ ಮುದುರಕ್ಕದೇವಿಯ ಕಾಲದಲ್ಲಿ ವೇಣೂರು ಗೋಮಟೇಶ್ವರಸ್ವಾಮಿಯ ಮಸ್ತಕಾಭಿಷೇಕವಾಗಿದ್ದಿತು.

ಬಳಿಕ ಕ್ರಿ. ಶ. ೧೬೪೭ರಿಂದ ೧೭೮೬ರ ವರೆಗೆ ೩ನೆಯ ಪಾಂಡ್ಯಪ್ಪಾಜಿಲ ಮೊದಲ್ಗೊಂಡು ಕೆಲವು ಅರಸರು ರಾಜ್ಯವಾಳಿದರು. ಅವರ ಕಾಲದಲ್ಲಿ ಹೆಚ್ಚಿನ ಧರ್ಮಕಾರ್ಯಗಳು ಜರಗಲಿಲ್ಲ. ಕ್ರಿ. ಶ. ೧೭೯೯ರಲ್ಲಿ ಕನ್ನಡ ಜಿಲ್ಲೆಯು ಇಂಗ್ಲೀಷರ ಸ್ವಾಧೀನವಾದಂದಿನಿಂದ ಈ ಅಜಿಲರಸರ ಮನೆತನದವರಿಗೆ ಈಗಲೂ ೫೦ ವರಹ ೨೦೦—೦—೦ ರೂಪಾಯಿ ವರ್ಷಾಶನ ಕೊಡುತ್ತಿರುವರು. ಈಗಿನ ಅಜಿಲರು ಅಳದಂಗಡಿ ಅರಮನೆಯಲ್ಲಿಯೇ ವಾಸವಾಗಿರುತ್ತಾರೆ.

[‘ವಿವೇಕಾಭ್ಯುದಯ’ದ ಕೃಪೆಯಿಂದ]



# ವಿವಿಧ
# ವಿನೋದಾವಳಿಗಳು

ಪಾವೂರು ಹರೇಕಳ ವಿಲೆಜ್ ಎಡ್ವಾನ್ಸ್‌ಮೆಂಟ್ ಸಂಘದ ಸಹಾಯಾರ್ಥವಾಗಿ.

## ತಾ. 29—12—1954ನೇ ಬುಧವಾರ

ಸಾಯಂಕಾಲ 6-30 ಗಂಟೆಯಿಂದ ಪ್ರಾರಂಭವಾಗಿವೆ.

**ಮಂಗಳೂರು ಮಿಲಾಗ್ರಿಸ್ ಹೈಸ್ಕೂಲಿನ ಬಯಲಲ್ಲಿ**



ನಗರವಾಸಿಗಳು ಹಿಂದೆಂದೂ ನೋಡಿರದ
ಅದ್ವಿತೀಯ ಆಕರ್ಷಣೆಗಳು.

ಮನೋಹರ ಭಾರತೀಯ ನೃತ್ಯಗಳು !
ಕರ್ಣಾನಂದಕರ ಸಂಗೀತ!
ಹರ್ಷದಾಯಕ ಅಮೇರಿಕನ್ ಜಾರ್ಝ್ ನರ್ತನ!
ಚೈನಿಸ್ ಮತ್ತು ಮಲಬಾರ್ ಆಟಗಾರರ ಅದ್ಭುತ ಸರ್ಕಸ್ !
ಮಾತಾಡುವ ಬೊಂಬೆ, ಮೆಜಿಕ್, ಪಂಚ್ ಮತ್ತು ಜೂಡಿ ಇತ್ಯಾದಿ
ಹಲವಾರು ಮನೋರಂಜಕ ಪ್ರದರ್ಶನಗಳು.

**ಸ್ತ್ರೀಯರಿಗೆ:— ನರ್ತನಕ್ಕೆ ಅರ್ಧ ಚಾರ್ಜು.**
**ಸರ್ಕಸ್, ಪಂಚ್ ಮತ್ತು ಜೂಡಿ ಪ್ರದರ್ಶನಕ್ಕೆ ಪ್ರವೇಶ ಧನವಿಲ್ಲ.**

ಕಲ್ಕತ್ತ ಮತ್ತು ಬೆಂಗಳೂರಿನಿಂದ ಬಂದಿರುವ ಬೋಕ್ಸರರೊಡನೆ ಕೈಕೊಡಲಿಕ್ಕೆ ಇಚ್ಛಿಸುವವರು ಮೊದಲಾಗಿ ನಮಗೆ ತಿಳಿಸಬಹುದು.

**ಪ್ರವೇಶ ಧನ 2 ಆಣೆ ಮಾತ್ರ.**

ಪ್ರೆಸಿಡೆಂಟ್,
(ಪ್ರವೇಶದ ಹಕ್ಕನ್ನು ಕಾದಿಡಲಾಗಿಯದೆ) ಪಿ. ಎಚ್. ವಿ. ಎ. ಸಂಘ.

Edited, Printed and Published by K. V. Shenoy
at The Prabhat Printers, Ltd., Mangalore-1.